# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1721 |
| ಮಾನ್ಯ ಸದಸ್ಯರ ಹೆಸರು | : | ಶ್ರೀ ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರ) |
| ಉತ್ತರಿಸುವ ದಿನಾಂಕ | : | 22.03.2021 |
| ಉತ್ತರಿಸುವ ಸಚಿವರು | : | ಮಾನ್ಯ ಉಪ ಮುಖ್ಯ ಮಂತ್ರಿಗಳು (ಉನ್ನತ ಶಿಕ್ಷಣ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಹಾಗೂ ಜೀವನೋಪಾಯ ಇಲಾಖೆ) |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ತಾಂತ್ರಿಕ ಶಿಕ್ಷಣ ಇಲಾಖೆಯಲ್ಲಿರುವ ಸರ್ಕಾರಿ ಜವಳಿ ಸಂಸ್ಥೆ (ಪಾಲಿಟೆಕ್ನಿಕ್), ಬೆಂಗಳೂರು, ಈ ಸಂಸ್ಥೆಯ ಪ್ರಾಂಶುಪಾಲರ ಹುದ್ದೆಗೆ ಮುಂಬಡ್ತಿ ನೀಡಲು 2004ರಲ್ಲಿ ಇಲಾಖಾ ಮುಂಬಡ್ತಿ ಸಮಿತಿ ಸಭೆಯನ್ನು ನಡೆಸಲಾಗಿದ್ದು, ಡಿಪಿಸಿ ನಡವಳಿಯಲ್ಲಿ ಪ್ರಾಂಶುಪಾಲರ ಹುದ್ದೆಗೆ ಅರ್ಹರಾದ ಅಭ್ಯರ್ಥಿಯ ಹೆಸರನ್ನು ಮುಚ್ಚಿಟ್ಟು ಲಕೋಟೆಯಲ್ಲಿ ಇಡಲಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ | ಮಾನ್ಯ ನ್ಯಾಯಾಲಯದ ಆದೇಶವನ್ನು ಅನುಷ್ಠಾನ ಮಾಡಲು ಮುಚ್ಚಿಟ್ಟು ಲಕೋಟೆ ತೆರೆಯಲು ತೆಗೆದುಕೊಂಡ ಕ್ರಮದ ಬಗ್ಗೆ ಸರ್ಕಾರದ ಕ್ರಮವೇನು;(ಸಂಪೂರ್ಣ ವಿವರ ನೀಡುವುದು) | ಪ್ರಾಂಶುಪಾಲರು ಗ್ರೇಡ್-1 ಹುದ್ದೆಗೆ ಅರ್ಹ ಉಪನ್ಯಾಸಕರಿಗೆ ಮುಂಬಡ್ತಿ ನೀಡುವ ಸಂಬಂಧವಾಗಿ ದಿನಾಂಕ:23.09.2004 ರಂದು ಪ್ರಧಾನ ಕಾರ್ಯದರ್ಶಿಗಳು, ಉನ್ನತ ಶಿಕ್ಷಣ ಇಲಾಖೆರವರ ಅಧ್ಯಕ್ಷತೆಯಲ್ಲಿ ಇಲಾಖಾ ಮುಂಬಡ್ತಿ ಸಮಿತಿ ಸಭೆಯನ್ನು ನಡೆಸಲಾಗಿದೆ.<br><br>ಸರ್ಕಾರಿ ಜವಳಿ ತಾಂತ್ರಿಕ ಸಂಸ್ಥೆ, ಬೆಂಗಳೂರು ಇಲ್ಲಿನ ಪ್ರಾಂಶುಪಾಲರು ಗ್ರೇಡ್-1 ಹುದ್ದೆಗೆ ಸದರಿ ಸಂಸ್ಥೆಯಲ್ಲಿನ ಉಪನ್ಯಾಸಕರುಗಳ ದಿನಾಂಕ:01.01.2003ರಲ್ಲಿದ್ದಂತೆ ಪ್ರಕಟಿಸಲಾದ ತಾತ್ಕಾಲಿಕ ಸಂಯುಕ್ತ ಜೇಷ್ಠತಾ ಪಟ್ಟಿಯಲ್ಲಿ ಕ್ರಮ ಸಂಖ್ಯೆ:1ರಲ್ಲಿರುವ ಶ್ರೀ ಎಂ.ಎಸ್. ದಬಾಡೆರವರ ಅರ್ಹತೆಯನ್ನು ಪರಿಶೀಲಿಸಿದ |
| ಇ | ಅನರ್ಹ ಅಭ್ಯರ್ಥಿಯು ಉನ್ನತ ಹುದ್ದೆಯನ್ನು ಅಲಂಕರಿಸಿದ್ದು, ಅರ್ಹ ಅಭ್ಯರ್ಥಿಯು ಸರ್ಕಾರಕ್ಕೆ ಮನವಿ ಸಲ್ಲಿಸಿದಾಗ್ಯೂ, ಯಾವುದೇ ಸೌಲಭ್ಯ ದೊರೆಯದೆ ಆರ್ಥಿಕ ನಷ್ಟ ಅನುಭವಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;(ವಿವರ ನೀಡುವುದು) | |

| | | |
|---|---|---|
| | | ಇಲಾಖಾ ಮುಂಬಡ್ತಿ ಸಮಿತಿಯು ಇವರ ವಿರುದ್ಧ ಕ್ರಿಮಿನಲ್ ಮೊಕದ್ದಮೆ ಬಾಕಿ ಇರುವುದರಿಂದ ಇವರ ಮುಂಬಡ್ತಿ ಬಗ್ಗೆ ಇಲಾಖಾ ಮುಂಬಡ್ತಿ ಸಮಿತಿ ಶಿಫಾರಸ್ಸನ್ನು ಮೊಹರು ಮಾಡಿದ ಲಕೋಟೆಯಲ್ಲಿಡಲು ತೀರ್ಮಾನಿಸಿ, ಸದರಿಯವರ ನಂತರ ಜೇಷ್ಠತೆ ಹೊಂದಿರುವ ಕ್ರಮ ಸಂಖ್ಯೆ: 2 ರಲ್ಲಿರುವ ಶ್ರೀಕಾಂತ್ ಜಿ. ರವರ ಅರ್ಹತೆಯನ್ನು ಪರಿಶೀಲಿಸಿದ ಇಲಾಖಾ ಮುಂಬಡ್ತಿ ಸಮಿತಿಯು ಇವರು ಪದೋನ್ನತಿಗೆ ಅರ್ಹರೆಂದು ತೀರ್ಮಾನಿಸಿ ಸದರಿಯವರಿಗೆ ಶ್ರೀ ಎಂ.ಎಸ್. ದಬಾಡೆ ರವರ ವಿರುದ್ಧದ ಪ್ರಕರಣದಲ್ಲಿ ಅವರು ದೋಷಮುಕ್ತರೆಂದು ತೀರ್ಮಾನಿಸಲ್ಪಟ್ಟಲ್ಲಿ ನೀಡಲಾಗುವ ಮುಂಬಡ್ತಿಯನ್ನು ರದ್ದುಗೊಳಿಸುವ ಷರತ್ತಿಗೊಳಪಡಿಸಿ ಶ್ರೀಕಾಂತ್ ಜಿ. ಇವರಿಗೆ ಸರ್ಕಾರಿ ಜವಳಿ ತಾಂತ್ರಿಕ ಸಂಸ್ಥೆ, ಬೆಂಗಳೂರು ಇಲ್ಲಿನ ಪ್ರಾಂಶುಪಾಲರ ಹುದ್ದೆಗೆ ಪದೋನ್ನತಿ ನೀಡಲು ಇಲಾಖಾ ಮುಂಬಡ್ತಿ ಸಮಿತಿ ಶಿಫಾರಸ್ಸು ಮಾಡಲಾಗಿದೆ. ಶ್ರೀ ಎಂ.ಎಸ್. ದಬಾಡೆ, ಉಪನ್ಯಾಸಕರು ಇವರು ಪ್ರಾಂಶುಪಾಲರು ಗ್ರೇಡ್-1 ಹುದ್ದೆಗೆ ಮುಂಬಡ್ತಿ ಸಂಬಂಧ ಮಾನ್ಯ ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ಅರ್ಜಿ:52/2008 ದಾಖಲಿಸಿದ್ದು, ಮಾನ್ಯ ನ್ಯಾಯಾಲಯವು ದಿನಾಂಕ:06.11.2008 ರಂದು ಸದರಿಯವರಿಗೆ ಮುಂಬಡ್ತಿ ನೀಡಿ ಎಲ್ಲಾ ಸೌಲಭ್ಯಗಳನ್ನು ನೀಡುವಂತೆ ಆದೇಶಿಸಿತ್ತು. ಮಾನ್ಯ ನ್ಯಾಯಾಲಯದ ದಿನಾಂಕ:06.11.2008ರ ಆದೇಶವನ್ನು ಪ್ರಶ್ನಿಸಿ, ಸರ್ಕಾರದ ವತಿಯಿಂದ ರಿಟ್ ಪಿಟಿಷನ್ ಸಂಖ್ಯೆ:16616/2009ನ್ನು ಸಲ್ಲಿಸಲಾಗಿತ್ತು. ಮಾನ್ಯ ನ್ಯಾಯಾಲಯವು ದಿನಾಂಕ:28.03.2013ರ ಆದೇಶದಲ್ಲಿ ಶ್ರೀ ಎಂ.ಎಸ್. ದಬಾಡೆ ಇವರ ವಿರುದ್ಧ ಬಾಕಿಯಿರುವ ಕ್ರಿಮಿನಲ್ ಪ್ರಕರಣ ಮುಕ್ತಾಯಗೊಂಡ ನಂತರ ಸದರಿಯವರ ಮುಂಬಡ್ತಿ ಬಗ್ಗೆ ಪರಿಶೀಲಿಸಲು ಆದೇಶಿಸಿತ್ತು.<br><br>ಶ್ರೀ ಎಂ.ಎಸ್.ದಬಾಡೆ ಇವರು ದಿನಾಂಕ:30.06.2015 ರಂದು ಸರ್ಕಾರಿ ಸೇವೆಯಿಂದ ವಯೋನಿವೃತ್ತಿ ಹೊಂದಿರುತ್ತಾರೆ. ಇವರ ವಿರುದ್ಧ ಮಾನ್ಯ 6ನೇ ಎ.ಸಿ.ಎಂ.ಎಂ. ನ್ಯಾಯಾಲಯ, ಬೆಂಗಳೂರು ಇಲ್ಲಿ |

| | | |
|---|---|---|
| | | ಅರ್ಜಿ ಸಂಖ್ಯೆ:14306/98ರಲ್ಲಿ ದಾಖಲಾಗಿದ್ದ ಕ್ರಿಮಿನಲ್ ಪ್ರಕರಣದಲ್ಲಿ ಮಾನ್ಯ ನ್ಯಾಯಾಲಯವು ದಿನಾಂಕ: 07.07.2015ರಂದು ಸದರಿಯವರನ್ನು ದೋಷ ಮುಕ್ತಗೊಳಿಸಿ ಆದೇಶಿಸಿದೆ. ಈ ಹಿನ್ನೆಲೆಯಲ್ಲಿ, ಶ್ರೀ ಎಂ.ಎಸ್. ದಬಾಡೆ, ನಿವೃತ್ತ ಆಯ್ಕೆ ಶ್ರೇಣಿ ಉಪನ್ಯಾಸಕರು ಇವರಿಗೆ ಪೂರ್ವಾನ್ವಯವಾಗಿ ಮುಂಬಡ್ತಿ ನೀಡುವ ಬಗ್ಗೆ ತಾಂತ್ರಿಕ ಶಿಕ್ಷಣ ಇಲಾಖೆಯು ಜನವರಿ 2021ರಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದು, ಪರಿಶೀಲಿಸಲಾಗುತ್ತಿದೆ. |

**ಇಡಿ 29 ಟಿಪಿಇ 2021**

**(ಡಾ॥ ಅಶ್ವತ್ಥನಾರಾಯಣ್.ಸಿ.ಎನ್)**
ಉಪ ಮುಖ್ಯ ಮಂತ್ರಿಗಳು
(ಉನ್ನತ ಶಿಕ್ಷಣ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಹಾಗೂ ಜೀವನೋಪಾಯ ಇಲಾಖೆ)